

# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 214(1628)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎನ್. ಅಪ್ಪಾಜಿಗೌಡ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮುಖ್ಯಮಂತ್ರಿಗಳು

ವಿಷಯ : ಮಂಜೂರಾದ ವಿದ್ಯುತ್ ಉಪ ಕೇಂದ್ರಗಳ ಬಗ್ಗೆ

(ಅ) ಕಳೆದ ಮೂರು ವರ್ಷಗಳಲ್ಲಿ ಮಂಡ್ಯ ಜಿಲ್ಲೆಯ ವ್ಯಾಪ್ತಿಯಲ್ಲಿ ಇಂಧನ ಇಲಾಖೆ ವತಿಯಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರದ ಅನುದಾನದಲ್ಲಿ ಕೈಗೊಂಡ ಕಾರ್ಯಗಳು/ಯೋಜನೆಗಳು ಯಾವುವು; ಅವುಗಳಿಗೆ ಬಿಡುಗಡೆಯಾದ ಅನುದಾನವೆಷ್ಟು; (ತಾಲ್ಲೂಕುವಾರು ವಿವರವಾದ ಮಾಹಿತಿ ನೀಡುವುದು)

(ಆ) ಕಳೆದ ಮೂರು ವರ್ಷಗಳಲ್ಲಿ ಮಂಡ್ಯ ಜಿಲ್ಲೆಗೆ ಮಂಜೂರಾದ ವಿದ್ಯುತ್ ಉಪ ಕೇಂದ್ರಗಳ ಸಂಖ್ಯೆ ಎಷ್ಟು; ಅವುಗಳ ಅನುಷ್ಠಾನಕ್ಕೆ ಮೀಸಲಿರಿಸಿದ ಅನುದಾನವೆಷ್ಟು;

(ಇ) ಮಂಡ್ಯ ಜಿಲ್ಲೆಗೆ ಮಂಜೂರಾದ ಹೊಸ ವಿದ್ಯುತ್ ಉಪ ಕೇಂದ್ರಗಳಲ್ಲಿ ಎಷ್ಟು ಕಾಮಗಾರಿಗಳು ಪ್ರಾರಂಭವಾಗಿವೆ; ಹಾಗೂ ಯಾವ ಹಂತದಲ್ಲಿದೆ; (ತಾಲ್ಲೂಕುವಾರು ಮಾಹಿತಿ ನೀಡುವುದು); ಕಾಮಗಾರಿಗಳನ್ನು ಯಾವ ಗುತ್ತಿಗೆದಾರರಿಗೆ ನೀಡಲಾಗಿದೆ; (ಮಾಹಿತಿ ನೀಡುವುದು)

(ಈ) ಕಳೆದ ಮೂರು ವರ್ಷಗಳಲ್ಲಿ ಅಕ್ರಮ-ಸಕ್ರಮ ಶೀಘ್ರ ಸಂಪರ್ಕ ಹೊಂದಲು ಸಾರ್ವಜನಿಕರಿಂದ ಸಲ್ಲಿಕೆಯಾದ ಅರ್ಜಿಗಳೆಷ್ಟು; ಅದರಲ್ಲಿ ವಿಲೇವಾರಿ ಮಾಡಿದ ಅರ್ಜಿಗಳೆಷ್ಟು; ವಿಲೇವಾರಿಯಾಗದಿರುವ ಅರ್ಜಿಗಳೆಷ್ಟು; ವಿಲೇವಾರಿಯಾಗದಿರಲು ಕಾರಣವೇನು? (ಮಂಡ್ಯ ಜಿಲ್ಲೆಯ ತಾಲ್ಲೂಕುವಾರು ಮಾಹಿತಿ ನೀಡುವುದು)